# ಸವಾಲುಗಳ ನಡುವೆಯೂ ಘನತೆ

## ಒಡಹುಟ್ಟಿದವಳ ಮಾತುಗಳು

ಪ್ರೇಮಾ ರಘುನಾಥ್

ಹಲವು ವರ್ಷಗಳ ಕಾಲ ಮನೆಯಲ್ಲಿ ನಾನೇ ಚಿಕ್ಕ ಮಗಳಾಗಿದ್ದವಳು ಅಕ್ಕ ಎಂದು ಆದಾಗ ನನ್ನ ಮೊದಲ ಪ್ರತಿಕ್ರಿಯೆ ಸಂಭ್ರಮ ಮತ್ತು ಹೆಮ್ಮೆಯಿಂದ ಕೂಡಿತ್ತು. ಯಾರಿಗಾದರೂ ಆದೇಶಗಳನ್ನು ನೀಡುವ ಮತ್ತು ಅವುಗಳನ್ನು ಯಾರಾದರೂ ಪಾಲಿಸುವಂತೆ ಮಾಡುವ ಅವಕಾಶ ಕಟ್ಟಕಡೆಗೂ ಸಿಕ್ಕಿತಲ್ಲ ಎಂಬ ತೃಪ್ತ ಭಾವನೆ ಅದಾಗಿತ್ತು ಎಂಬುದನ್ನು ಒಪ್ಪಿಕೊಳ್ಳಲೇಬೇಕು.

ಆದರೆ ಸಮಯ ಕಳೆದಂತೆ ಅದು ನಾನು ಅಂದುಕೊಂಡಂತೆ ಆಗಲಿಲ್ಲ. ನನ್ನ ತಂಗಿಗೆ ಸೆರೆಬ್ರಲ್ ಪಾಲ್ಸಿ (Cerebral Palsy -CP) ಇದೆಎಂದು ವೈದ್ಯರು ಪತ್ತೆ ಮಾಡಿದರು. ಇದರ ಪರಿಣಾಮವಾಗಿ ಕುಟುಂಬದಲ್ಲಿ ಉಂಟಾದ ದಿಗ್ಭ್ರಾಂತಿ, ಗೊಂದಲ ಮತ್ತು ತಲ್ಲಣಗಳು ತಗ್ಗಲು ಕೆಲವು ತಿಂಗಳುಗಳೇ ಬೇಕಾದವು. ಸಹಜವಾಗಿ ನನ್ನ ಅಪ್ಪ–ಅಮ್ಮ ಬಹಳ ಚಿಂತಿತರಾಗಿದ್ದರು. ಏನು ಮಾಡಬೇಕು ಎಂದು ದಾರಿಕಾಣದಾಗಿದ್ದರು; ಏಕೆಂದರೆ ಅದು ಇಂತಹುದೊಂದು ಸ್ಥಿತಿಯ ಬಗ್ಗೆ ಹೆಚ್ಚೇನೂ ಗೊತ್ತಿರದಿದ್ದ ಕಾಲ; ಸೆರೆಬ್ರಲ್‌ಪಾಲ್ಸಿ ಬರುಬರುತ್ತಾ ಚಲನೆ, ಮಾತು ಮತ್ತು ಬೆಳವಣಿಗೆ ಸೇರಿದಂತೆ ಅನೇಕ ವಿಷಯಗಳಲ್ಲಿ ಅಶಕ್ತತೆಗಳು ಉಂಟಾಗುವಂತೆ ಮಾಡುತ್ತಿತ್ತು. ದೈಹಿಕವಾಗಿ ಸಮರ್ಥವಲ್ಲದ ಮಗುವನ್ನು ಹೊಂದಿರುವುದು ಎಂದರೆ ಒಂದು ಸುಸಂಸ್ಕೃತ ರೀತಿಯ ಸಾಮಾಜಿಕ ಬಹಿಷ್ಕಾರಕ್ಕೆ ಒಳಗಾದಂತೆ. ಎಲ್ಲರೂ ನಿಮಗೆ ಸಹಾನುಭೂತಿ ವ್ಯಕ್ತಪಡಿಸುತ್ತಾರೆ ಮತ್ತು ಎಲ್ಲರೂ ಅರ್ಥ ಮಾಡಿಕೊಂಡಂತೆ ಕಾಣಿಸುತ್ತಾರೆ. ಆದರೆ, ವಾಸ್ತವವಾಗಿ ಯಾರೂ ಅರ್ಥ ಮಾಡಿಕೊಂಡಿರುವುದಿಲ್ಲ! ಸಾಮಾಜಿಕ ಕಾರ್ಯಕ್ರಮಗಳಿಗೆ ಬರುವ ಆಹ್ವಾನಗಳೂ ಕಡಿಮೆಯಾಗುತ್ತಾ ಹೋದವು. ನಾವು ಮಾತ್ರ ಗೀತಾಳನ್ನು (ನನ್ನ ತಂಗಿ) ಯಾರಕಣ್ಣಿಗೂ ಕಾಣದಂತೆ ಮುಚ್ಚಿಡಲು ಹೋಗದೆ, ಕುಟುಂಬದ ಅತ್ಯಂತ ಸಕ್ರಿಯ ಸದಸ್ಯಳಾಗಿ ಇರುವಂತೆ ನೋಡಿಕೊಳ್ಳಲು ನಿರ್ಧರಿಸಿದ್ದೆವು. ಆದರೆ, ನಮ್ಮನ್ನು ಕಂಡರೆ ಮುಜುಗುರಪಡುತ್ತಿದ್ದ ಪರಿಸ್ಥಿತಿ ನಿರ್ಮಾಣವಾಯಿತು. ನಾನು ಇದರಿಂದ ಉಂಟಾದ ಸಮಸ್ಯೆಗಳನ್ನು ಸ್ಥೂಲವಾಗಿ ಚಿತ್ರಿಸಲು ಪ್ರಯತ್ನಿಸುತ್ತೇನೆ. ಅಂದಿನ ದಿನಕ್ಕೂ ಇಂದಿಗೂ ಎಲ್ಲದರಲ್ಲೂ ಅಗಾಧ ಬದಲಾವಣೆಗಳು ಆಗಿವೆ. ಆದರೆ, ಮನುಷ್ಯರ ಪ್ರತಿಕ್ರಿಯೆ ಮಾತ್ರ ಕಿಂಚಿತ್ತೂ ಬದಲಾಗಿಲ್ಲ. ಈ ಲೇಖನವನ್ನು ಓದುತ್ತಿರುವವರಲ್ಲಿ ಬಹಳಷ್ಟು ಜನರು ಇಲ್ಲಿ ಹೇಳಿರುವ ಕೆಲವು ಅಂಶಗಳು ಈಗಲೂ ಪ್ರಸ್ತುತ ಎಂಬುದನ್ನು ಗುರುತಿಸುತ್ತಾರೆ ಎಂದು ನಾನು ಭಾವಿಸುತ್ತೇನೆ.

**ಕಳೆದುಹೋದ ಬಾಲ್ಯ**

ಇಂಥ ಕುಟುಂಬದ ಇತರ ಮಕ್ಕಳು ರಾತ್ರಿ ಬೆಳಗಾಗುವುದರೊಳಗೆ ಕಡೆ ಪಕ್ಷ ಹೊರನೋಟಕ್ಕಾದರೂ ಪ್ರಬುದ್ಧರಾಗಬೇಕಾಗುತ್ತದೆ. ದೈಹಿಕವಾಗಿ ಅಸಮರ್ಥವಾಗಿರುವ ಮಗುವನ್ನು ಹೊಂದಿದಾಗ ಅನಿವಾರ್ಯವಾಗಿ ಮಾಡಿಕೊಳ್ಳಬೇಕಾದ ಅಗಾಧ ಬದಲಾವಣೆಯಲ್ಲಿ ನನ್ನ ಅಪ್ಪ–ಅಮ್ಮ ಕಳೆದುಹೋಗಿದ್ದರು. ಅನೇಕ ಅಗತ್ಯಗಳ ಸುತ್ತ ಎಲ್ಲವೂ ಸುತ್ತುತ್ತಿತ್ತು. ಸಾಮಾನ್ಯ ದಿನಚರಿಯು ಫಿಸಿಯೋಥೆರಪಿ, ಸ್ಪೀಚ್ ಥೆರಪಿ ಮತ್ತಿತರ ಅನೇಕ ಥೆರಪಿಗಳಿಗೆ ಅವಕಾಶ ಮಾಡಿಕೊಡಬೇಕಿತ್ತು. ಈ ಬಗ್ಗೆ ಹೆತ್ತವರು ಲವಲವಿಕೆಯಿಂದ ಭಾಗವಹಿಸದೇ ಹೋದರೆ ಒಡಹುಟ್ಟಿದವರು ಇಷ್ಟೊಂದು ಚಿಕ್ಕ ವಯಸ್ಸಿನಲ್ಲಿ ಹೊರಲಾಗದ ಜವಾಬ್ದಾರಿಗಳನ್ನು ಹೊರಬೇಕಾಗಿ ಬರುತ್ತದೆ. ಪರಿಣಾಮವಾಗಿ ಅವರು ತಮ್ಮ ಸ್ನೇಹಿತರ ಬಳಗದಿಂದ ಹೊರಬರಬೇಕಾಗುತ್ತದೆ.

ಎರಡನೆಯದಾಗಿ, ದೈಹಿಕ ವೈಕಲ್ಯವುಳ್ಳ ಮಗುವಿನ ರಕ್ಷಣೆಯ ಉದ್ದೇಶದಿಂದ ಒಡಹುಟ್ಟಿದವರ ಅನೇಕ ಸಾಧನೆಗಳನ್ನು ಅಷ್ಟೇನೂ ಮಹತ್ವವಲ್ಲ ಎಂಬಂತೆ ಪರಿಗಣಿಸಲಾಗುತ್ತಿತ್ತು. ಇಂದು ಅನೇಕ ಸಂಗತಿಗಳು ಉತ್ತಮವಾಗಿ ಬದಲಾವಣೆ ಹೊಂದಿದ್ದರೂ ಮತ್ತು ವ್ಯಾಖ್ಯಾನಗಳನ್ನು ಬದಲಾಯಿಸಿದ್ದರೂ, ಒಡಹುಟ್ಟಿದ ಕಿರಿಯ ಮತ್ತು ಹಿರಿಯ ಮಕ್ಕಳಿಗೆ ಅವರು ತಮ್ಮ ಪೂರ್ಣ ಸಾಮರ್ಥ್ಯಕ್ಕೆ ಬೆಳೆಯಲು ಬೇಕಾದಷ್ಟು ಗಮನವನ್ನು ಹೆತ್ತವರು ನೀಡಬೇಕಾದುದು ಅತ್ಯಗತ್ಯ ಎಂದು ನನಗೆ ಇಂದಿಗೂ ಅನಿಸುತ್ತದೆ.

ಮೂರನೆಯದಾಗಿ, ಈ ಕೊರತೆಗಳನ್ನು ಎಂದಿಗೂ ತುಂಬಿಕೊಡಲು ಸಾಧ್ಯವಿಲ್ಲ. ಒಮ್ಮಿಂದೊಮ್ಮೆಲೇ ಈ ಪ್ರಬುದ್ಧತೆಯನ್ನು ನನ್ನ ಮೇಲೆ ಹೇರಿದ್ದರಿಂದಾಗಿ ಆದ ಪರಿಣಾಮಗಳನ್ನು ಆತಂಕ, ಇತರರು ಸತ್ತು ತಾನೊಬ್ಬಳೇ ಉಳಿದಾಗ ಆಗುವಂತಹ ಹಳಹಳಿಕೆಯ ಭಾವ ಮತ್ತು ಗೊಂದಲಗಳನ್ನು ನಾನು ಗುರುತಿಸಿದ್ದೇನೆ.

**ಹೆಚ್ಚಿದ ಪರಾನುಭೂತಿ**

ಇಂತಹ ಪರಿಸ್ಥಿತಿಯಲ್ಲಿ ಇದ್ದು ಕೊಂಡೇ ಬೆಳೆಯುವುದರಿಂದ ಸಿಗುವ ಉತ್ತಮ ಅನುಭವ ಇನ್ನೂ ಹೆಚ್ಚು ಸಹನ ಶೀಲವಾದುದು. ಜೀವನ ಅನೇಕ ಅಚ್ಚರಿಗಳನ್ನು ನಮ್ಮ ಮುಂದೆ ತಂದಿಡುತ್ತದೆ ಎಂಬ ಪಾಠವನ್ನು ಚಿಕ್ಕ ವಯಸ್ಸಿನಲ್ಲಿಯೇ ಕಲಿಯುವಂತಾಯಿತು. ಚಿಕ್ಕ ವಯಸ್ಸಿನಲ್ಲೇ ಮೈಗೂಡಿದ ಜವಾಬ್ದಾರಿ ಪ್ರಜ್ಞೆ ನಮ್ಮಲ್ಲಿ ನಾಯಕತ್ವ ಸ್ವೀಕರಿಸುವ ಗುಣ ಹಾಗು ಸ್ವಾವಲಂಬನೆಯ ಪ್ರಜ್ಞೆಯಾಗಿ ಬೆಳೆಯಬಲ್ಲದು.

ನನ್ನ ಪ್ರಕರಣವನ್ನೇ ತೆಗೆದುಕೊಂಡರೆ ವ್ಯಕ್ತಿವ್ಯಕ್ತಿಗಳ ನಡುವಿನ ಭಿನ್ನತೆಯನ್ನು ಮೊದಲಿಗಿಂತಲೂ ಹೆಚ್ಚಿಗೆ ಸಹಿಸಿಕೊಳ್ಳುವುದನ್ನು ಕಲಿಸಿತು ಎಂದು ಭಾವಿಸುತ್ತೇನೆ. ನಾವು ಇತರರೊಡನೆ ಚೆನ್ನಾಗಿ ಹೊಂದಿಕೊಂಡು ಹೋಗಬೇಕಾದರೆ ಎಲ್ಲರೂ ಒಂದೇ ರೀತಿಯಲ್ಲಿ ಇರಬೇಕು ಎಂದು ನನಗನಿಸುವುದಿಲ್ಲ. ಒಂದು ಹಂತದಲ್ಲಿ ಯೋಚಿಸುವುದಾದರೆ ಗೆಳೆಯರನ್ನು ಮಾಡಿಕೊಳ್ಳುವುದು ತೀರಾ ಸುಲಭ, ಇನ್ನೊಂದು ರೀತಿಯಲ್ಲಿ ಅತ್ಯಂತ ಕಷ್ಟ. ಒಂದು ಹಂತದಲ್ಲಿ, ಗೆಳೆತನದ ಅಗ್ನಿ ಪರೀಕ್ಷೆ ಹೇಗಿತ್ತೆಂದರೆ ಇನ್ನೊಬ್ಬ ವ್ಯಕ್ತಿ ಗೀತಾಳನ್ನು ಹೇಗೆ ಸ್ವೀಕರಿಸುತ್ತಾನೆಯೋ ಇಲ್ಲವೋ ಎಂಬುದನ್ನು ಅದು ಅವಲಂಭಿಸಿತ್ತು. ಅವರು ಆಕೆಯನ್ನು ತಮ್ಮಲ್ಲಿ ಒಬ್ಬಳಂತೆ ಸೇರಿಸಿಕೊಂಡರೆ ಅವರು ಸರಿ ಎಂದುಕೊಳ್ಳುತ್ತಿದ್ದೆ. ಇಲ್ಲದೇ ಹೋದರೆ ಅವರೊಡನೆ ಜಗಳ ಉಂಟಾಗಿ ಅದು ಕೆಲವೊಮ್ಮೆ ಕಣ್ಣೀರಿನಲ್ಲಿ ಕೊನೆಗೊಳ್ಳುತ್ತಿತ್ತು.

**ಅಪಾರ ಪ್ರೀತಿ**

ದೈಹಿಕ ವಿಕಲತೆಯುಳ್ಳ ವ್ಯಕ್ತಿಗೆ ಸಹೋದರಿಯಾಗಿರುವುದರ ಅನುಭವದ ಮುಖ್ಯಭಾಗವೊಂದರ ಬಗ್ಗೆ ನಾನಿಲ್ಲಿ ಹೇಳಲೇಬೇಕು. ಇಲ್ಲಿ ಅಪಾರ ಪ್ರೀತಿ, ಅಕ್ಕರೆ ಮತ್ತು ಆರೈಕೆಯ ಪ್ರಜ್ಞೆ ಬಹಳವಾಗಿ ಇರುತ್ತದೆ. ಈ ಅನುಭವ ತುಂಬಾ ಒಳ್ಳೆಯದೇ. ಸಾಮಾನ್ಯವಾಗಿ ಈ ಸುಂದರ ಅನುಭವಪಡೆಯುವುದಕ್ಕೆ ಜನರು ತಮ್ಮದೇ ಮಕ್ಕಳು ಹುಟ್ಟುವವರೆಗೂ ಕಾಯಬೇಕಾಗುತ್ತದೆ. ಆದರೆ ಒಂದು ವಿಶೇಷ ಜನವರ್ಗವಾದ ನಾವು ಅದನ್ನು ಇನ್ನೂ ಮುಂಚೆಯೇ ಅನುಭವಿಸುತ್ತೇವೆ. ನಾನು ಈ ಹಿಂದೆ ಹೇಳಿದಂತೆ ಬಾಲ್ಯ ಕಳೆದು ಹೋಗುವುದರ ಜೊತೆಗೆ ಈ ಅನುಭವವೂ ಕೂಡಿ ಬರುತ್ತದೆ, ಆದರೂ ಇದು ಪ್ರಯೋಜನಕಾರಿ.

**ಹೆತ್ತವರು ಏನು ಮಾಡಬಹುದು?**

ದೈಹಿಕ ವಿಕಲತೆಯುಳ್ಳ ಮಗುವನ್ನು ಹೊಂದಿರುವಲ್ಲಿ ಕಂಡುಬರುವ ಇನ್ನೊಂದು ದೊಡ್ಡ ಅಂಶ ಏನೆಂದರೆ ಅದು ತಂದೆತಾಯಿ, ಒಡಹುಟ್ಟಿದವರು, ಅಜ್ಜಿ–ತಾತ ಮತ್ತು ಸ್ವಲ್ಪಮಟ್ಟಿಗಾದರೂ ವಿಸ್ತೃತ ಕುಟುಂಬದ ಇತರ ಎಲ್ಲರ ಜೀವನದ ಮೇಲೂ ಪರಿಣಾಮ ಬೀರುತ್ತದೆ. ತಂದೆತಾಯಿಗಳಿಗಂತೂ ಅನೇಕ ವಿಷಯಗಳು ಅನುಭವಕ್ಕೆ ಬರುತ್ತವೆ; ವಿಷಾದ, ನಿರಾಕರಣೆ, ಜವಾಬ್ದಾರಿ ಹೊರದೇ ಇರುವುದು. ಇದು ಹೋಗುವಂತಹ ಪರಿಸ್ಥಿತಿಯಲ್ಲ ಎಂಬ ಅರಿವನ್ನು ಸದಾ ಇಟ್ಟುಕೊಂಡು ಇವನ್ನೆಲ್ಲಾ ಅನುಭವಿಸುವುದು. ಹೀಗಿದ್ದರೂ ದಿನನಿತ್ಯದ ಬದುಕನ್ನು ಬದುಕಲೇ ಬೇಕು–ಕೆಲಸಕ್ಕೆ ಹೋಗುವುದು, ಮನೆಯನ್ನು ನಿರ್ವಹಿಸುವುದು, ಸಾಮಾಜಿಕ ಸಂಪರ್ಕವನ್ನು ಕಾಯ್ದುಕೊಳ್ಳುವುದು, ಇತರ ಜವಾಬ್ದಾರಿಗಳನ್ನು ನಿಭಾಯಿಸುವುದು, ಇದರ ಜೊತೆಗೇ ಹಿರಿಯ ಅಥವಾ ಕಿರಿಯ ಇನ್ನೊಂದು ಮಗುವಿಗಾಗಿ ಸಮಯ ಮತ್ತು ಶಕ್ತಿಯನ್ನು ಕಂಡು ಕೊಳ್ಳುವುದು. ಹೀಗೆ ಪಟ್ಟಿಗಳು ಬೆಳೆಯುತ್ತವೆ. ಇವೆಲ್ಲವೂ ಸವಾಲಿನ ಕೆಲಸಗಳೇ ಆಗಿವೆ. ಇಲ್ಲಿ ಇನ್ನೊಂದು ವಿಷಯವಿದೆ ಅವರ ಇನ್ನೊಂದು ಮಗು (ಅಥವಾ ಮಕ್ಕಳು) ಸಹ ಹೊಸತೊಂದು ಬಗೆಯ ವಾಡಿಕೆಗೆ  ಹೊಂದಿಕೊಳ್ಳ ಬೇಕಾಗುತ್ತದೆ. ಶ್ರೇಯಾಂಕಗಳು ಕುಸಿಯಬಹುದು (ಅವರಿಂದ ನನಗೆ ಹೀಗಾಯಿತು), ರಂಪಾಟಗಳು ನಡೆಯಬಹುದು, ಹೊಸ ಹೊಸ ರೀತಿಯ ವರ್ತನೆಗಳು ಕಾಣಿಸಿಕೊಳ್ಳಬಹುದು.

ಹೆತ್ತವರು ಇಲ್ಲಿ ಸಹಾಯ ಪಡೆದುಕೊಂಡು ವೈಕಲ್ಯವಿರುವ ಮಗುವಿನ ಒಡಹುಟ್ಟಿದ ಮಕ್ಕಳು ತಮ್ಮೊಂದಿಗೆ ಗುಣಮಟ್ಟದ ಸಮಯ ಕಳೆಯುವಂತೆ ಹಾಗೂ ಅವಕಾಶವನ್ನು ಪಡೆದುಕೊಳ್ಳುವಂತೆ ನೋಡಿಕೊಳ್ಳಬೇಕು. ಇದನ್ನು ಹೇಳುವುದೇನೋ ಸುಲಭ, ಆದರೆ ಮಾಡುವುದು ಕಷ್ಟ. ಆದರೆ ಹಿಂದಿನ ಅನುಭವದಿಂದ ಪಡೆದ ಜ್ಞಾನದಿಂದ ಏನೇನು ಬದಲಾಗಬೇಕು ಎಂಬುದನ್ನು ನಾನು ಕಾಣಬಲ್ಲೆ. ಅಂತಿಮವಾಗಿ ದೈಹಿಕ ವೈಕಲ್ಯಗಳುಳ್ಳ ಮಕ್ಕಳಿರುವ ತಂದೆತಾಯಿ ಸ್ವಯಂ ವಿಶೇಷ ವ್ಯಕ್ತಿತ್ವದವರಾಗುತ್ತಾರೆ ಆವರೆಗೆ ತಮ್ಮಲ್ಲಿ ಅಂತಹುದೊಂದು ಶಕ್ತಿಯಿದೆ ಎಂಬ ಅರಿವೂ ಇಲ್ಲದ ಇಬ್ಬರು ತೀರಾಸಾಮಾನ್ಯ ಮನುಷ್ಯರು (ಅಪ್ಪ–ಅಮ್ಮ) ಅಂತಹ ವೀರೋಚಿತವಾದ ಶಕ್ತಿಯನ್ನೆಲ್ಲ ಬೆಳೆಸಿಕೊಳ್ಳಲು ಆರಂಭಿಸುತ್ತಾರೆ. ಒಡಹುಟ್ಟಿದ ಮಕ್ಕಳೂ ನಿಜಕ್ಕೂ ವಿಶೇಷ ವ್ಯಕ್ತಿಗಳಾಗುತ್ತಾರೆ. ಇತರರು ಕೈಗೊಂಡ ನಿರ್ಧಾರಗಳಿಗೆ, ಅದೆಲ್ಲ ಏಕೆ ಎಂಬರಿವಿಲ್ಲದೆಯೂ ದಿಟ್ಟಬೆಂಬಲ ನೀಡಿ ತನ್ನ ಸಹೋದರ ಅಥವಾ ಸಹೋದರಿಗಾಗಿ ಏನು ಬೇಕಾದರೂ ಮಾಡಲು ಸಿದ್ಧರಿದ್ದು  ಅವರು ವಿಶೇಷ ವ್ಯಕ್ತಿಗಳಾಗುತ್ತಾರೆ.

ಈ ಕೆಲವು ಅಂಶಗಳನ್ನು ನಾನು ಗೀತಾಳಿಂದ ಕಲಿತುಕೊಂಡಿದ್ದೇನೆ. ಆಕೆಯ ಘನತೆಯ ಮತ್ತು ಆಕರ್ಷಕ ಉದಾರಗುಣ ಈ ಎಲ್ಲ ಏಳು ಬೀಳುಗಳನ್ನೂ ಮೀರಿ ನಿಲ್ಲುತ್ತಿತ್ತು. ತನ್ನ ದೈಹಿಕ ಹಾಗೂ ಭಾವನಾತ್ಮಕವಾದ ಕಠಿಣಾತಿ ಕಠಿಣ ಸವಾಲುಗಳ ನಡುವೆಯೂ ಆಕೆ ಒಂದು ಘನತೆಯನ್ನು ತೋರುತ್ತಿದ್ದಳು. ಯಾವುದೇ ವ್ಯಕ್ತಿಯ ಬಾಹ್ಯವನ್ನು ಭೇದಿಸಿ ನೋಡಿ ಅವರ ಸ್ವಭಾವ ಏನೆಂದು ತಕ್ಷಣ ಗ್ರಹಿಸಬಲ್ಲವಳಾಗಿದ್ದಳು ಮತ್ತು ನನಗೂ ಅದನ್ನು ಹೇಳುತ್ತಿದ್ದಳು. ನಾವು ಅಚ್ಚುಮೆಚ್ಚಿನ ಸಹೋದರಿಯರಾಗಿದ್ದೆವು ಮತ್ತು ಶ್ರೇಷ್ಠ ಗೆಳತಿಯರಾಗಿದ್ದೆವು.



**ಪ್ರೇಮಾ ರಘುನಾಥ್** ಅವರು ಲರ್ನಿಂಗ್‌ಕರ್ವ್‌ನ ಮುಖ್ಯ ಸಂಪಾದಕರು. ಚೆನ್ನೈನಲ್ಲಿ ಬಹಳ ವರ್ಷಗಳ ಕಾಲ ಸಿಬಿಎಸ್‌ಇ ಮತ್ತು ತರುವಾಯ ಐಬಿ ಶಾಲೆಯಲ್ಲಿ ಬೋಧನೆ ಮಾಡುತ್ತಿದ್ದ ಅವರು ಈಗ ಚೆನ್ನೈನ ಕೆಲವು ಶಾಲೆಗಳ ಸಮಿತಿಗಳಲ್ಲಿ ಸದಸ್ಯರಾಗಿದ್ದಾರೆ. ಅವರನ್ನು ಈ ಇ–ಮೇಲ್ ಮೂಲಕ ಸಂಪರ್ಕಿಸಬಹುದು. prema.raghunath@azimpremjifoundation.org

ಅನುವಾದ: **ಮಂಜುನಾಥ್ ಚಾಂದ್** । ಪರಿಶೀಲನೆ: **ಜೈಕುಮಾರ್ ಮರಿಯಪ್ಪ**